ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಕರ್ನಾಟಕ ರಾಜ್ಯದ ಸರ್ಕಾರಿ ಪ್ರೌಢ ಶಾಲೆಯಲ್ಲಿ ಅರೆಕಾಲಿಕ ಶಿಕ್ಷಕ ಕಾರ್ಯನಿರ್ವಹಣೆಯ ಬಗ್ಗೆ

ಶ್ರೀ ಬಸವರಾಜ ಹೊರಟ್ಟಿ (ಶಿಕ್ಷಕರ ಕ್ಷೇತ್ರ):-

753 (994) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ರಾಜ್ಯದಲ್ಲಿ ಸರ್ಕಾರಿ ಪ್ರೌಢಶಾಲೆಗಳಲ್ಲಿ ಅರೆಕಾಲಿಕ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ಸೇವೆಯನ್ನು ಕರ್ನಾಟಕ ನಾಗರೀಕ ಸೇವೆಯಲ್ಲಿ ಯಾವಾಗ ವಿಲೀನಗೊಳಿಸಲಾಯಿತು ; ಎಷ್ಟು ಜನ ಶಿಕ್ಷಕರಿರುವರು ; (ವಿವರವಾದ ಮಾಹಿತಿ ನೀಡುವುದು)

(ಆ) ಸದರಿ ಶಿಕ್ಷಕರುಗಳು ಯಾವ ದಿನಾಂಕದಿಂದ ಅರೆಕಾಲಿಕ ಶಿಕ್ಷಕರಾಗಿ ಕೆಲಸ ನಿರ್ವಹಿಸುತ್ತಿದ್ದು ಹಾಗೂ ಇವರನ್ನು ವಿಲೀನಗೊಳಿಸುವ ಮುನ್ನ ಎಷ್ಟು ವರ್ಷಗಳ ಕಾಲ ಅರೆಕಾಲಿಕ ಶಿಕ್ಷಕರಾಗಿ ಸೇವೆ ಸಲ್ಲಿಸಿರುತ್ತಾರೆ ; (ವಿವರವಾದ ಮಾಹಿತಿ ನೀಡುವುದು)

(ಇ) ಸದರಿ ಶಿಕ್ಷಕರುಗಳ ಅರೆಕಾಲಿಕ ಸೇವೆಯನ್ನು ಪಿಂಚಣಿ ಹಾಗೂ ಇತರೆ ಸೌಲಭ್ಯಗಳಿಗಾಗಿ ಅರ್ಹದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರಕ್ಕೆ ಇರುವ ತೊಂದರೆಗಳೇನು ; ಕಡತ ಸಂಖ್ಯೆ : ಇಡಿ : 16 : ಎಸ್.ಎಲ್.ಬಿ. 1996-96 ಯಾವ ಹಂತದಲ್ಲಿದೆ ;

(ಈ) ಸರ್ಕಾರ ಸದರಿಯವರಿಗೆ ಹಳೇ ಪಿಂಚಣಿಯನ್ನು ಯಾವಾಗ ಮಂಜೂರು ಮಾಡುವುದು ?